ದಿನಾಂಕ 13.7.2001 ರಂದು ಬಾಗಲಕೋಟೆ ಜಿಲ್ಲಾ ಸ್ಕೌಟರ್ಸ್ ಗೈಡರ್ಸ್‌ಗಳ ಸಮಾವೇಶ ನಡೆಯಿತು. ಮಾನ್ಯ ಜಿಲ್ಲಾ ಉಪನಿರ್ದೇಶಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳು ಈ ಸಮಾವೇಶದಲ್ಲಿ ಭಾಗವಹಿಸಿ ಶಿಬಿರಾರ್ಥಿಗಳಿಗೆ ಹಿತ ನುಡಿ ನುಡಿದರು.

ಶ್ರೀ ಕೆ. ತಿಮ್ಮಪ್ಪ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಹಾಗೂ ಶ್ರೀ ನಾರಾಯಣ ಶೆಟ್ಟಿ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು.

ಶ್ರೀ ಆರ್.ಎಸ್. ಪಾಟೀಲ್ ಎಂ.ಎಲ್.ಸಿ. ಜಿಲ್ಲಾ ಸಂಸ್ಥೆ ಅಧ್ಯಕ್ಷರು ಜಿಲ್ಲೆಯಲ್ಲಿನ ಸ್ಕೌಟ್ ಗೈಡ್ ಚಟುವಟಿಕೆಗಳಿಗೆ ಬೆಂಬಲ ಹಾಗೂ ಸಹಕಾರ ನೀಡುತ್ತಿದ್ದಾರೆ.

## ತುಮಕೂರು ಜಿಲ್ಲೆ

ದಿನಾಂಕ 19.7.2001 ರಂದು ತುಮಕೂರು ಜಿಲ್ಲೆಯ ಸ್ಕೌಟರ್ ಗೈಡರ್‌ಗಳ ಸಮಾವೇಶ ನಡೆಯಿತು. ಉಪ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಶ್ರೀಕಂಠಯ್ಯನವರು ಸಮಾವೇಶವನ್ನು ಉದ್ಘಾಟಿಸಿದರು. ತುಮಕೂರು ಉತ್ತರ ಜಿಲ್ಲೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಸೂರ್ಯನಾರಾಯಣ, ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮುಖ್ಯ ಅತಿಥಿಗಳಾಗಿದ್ದರು.

## ಹಾಸನ ಜಿಲ್ಲೆ

ದಿನಾಂಕ 13.7.2001 ರಂದು ಜಿಲ್ಲೆಯ ಸಮುದಾಯ ಭವನದ ಶಂಕುಸ್ಥಾಪನೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪನವರು ನೆರವೇರಿಸಿದರು.

## ಚಿಕ್ಕಮಗಳೂರು ಜಿಲ್ಲೆ

ದಿನಾಂಕ 13.7.2001 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪನವರು ಜಿಲ್ಲೆಯ ಪದಾಧಿಕಾರಿಗಳೊಂದಿಗೆ ಜಿಲ್ಲಾ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿದರು.

## ಚಿತ್ರದುರ್ಗಾ ಜಿಲ್ಲೆ

ದಿನಾಂಕ 21.7.2001 ರಂದು ಚಿತ್ರದುರ್ಗದ ವಾಸವಿ ಎಜುಕೇಷನ್ ಸೊಸೈಟಿಯಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್ ಗೈಡರ್ಸ್‌ಗಳ ಸಮಾವೇಶ ನಡೆಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪನವರು ಸಂದರ್ಭದಲ್ಲಿ ಅಭ್ಯರ್ಥಿಗಳನ್ನುದ್ದೇಶಿಸಿ ಮಾತನಾಡಿದರು.

## ದಾವಣಗೆರೆ ಜಿಲ್ಲೆ

ದಿನಾಂಕ 20.7.2001 ರಂದು ರಾಜ್ಯ ಮುಖ್ಯ ಆಯುಕ್ತರು ಜಿಲ್ಲೆಯ ಪದಾಧಿಕಾರಿಗಳೊಂದಿಗೆ ಜಿಲ್ಲಾ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿದರು. ದಾವಣಗೆರೆ ಜಿಲ್ಲಾಧಿಕಾರಿ ಶ್ರೀ ಕೆ. ಶಿವರಾಂ ದಾವಣಗೆರೆ ಜಿಲ್ಲಾ ಪಂಚಾಯತ್ ಅಧ್ಯಕ್ಷಿಣಿ ಶ್ರೀಮತಿ ಅಣಬೇರು ಪಾರ್ವತಮ್ಮ ಇವರುಗಳನ್ನು ಮುಖ್ಯ ಆಯುಕ್ತರು ಭೇಟಿ ಮಾಡಿ ಅವರ ಸಹಕಾರವನ್ನು ಕೋರಿದರು.

ದಿನಾಂಕ 31.7.2001 ರಂದು ಜಿಲ್ಲಾ ಮಟ್ಟದ ಸ್ಕೌಟರ್ ಗೈಡರ್‌ಗಳ ಸಮಾವೇಶ ನಡೆಯಿತು.

## ಬೆಂಗಳೂರು ದಕ್ಷಿಣ ಜಿಲ್ಲೆ

135 ಝೂನ್ಸಿ ಸ್ಕೌಟ್ ಗ್ರೂಪ್‌ನ ಸ್ಕೌಟ್ ಮಾಸ್ಟರ್ ಆದ ಶ್ರೀ ಕೆ.ಆರ್ ಭೌನ್‌ಸ್ಲೆ (ಕಂಠಿ) ಇವರು ಶ್ರೀಲಂಕಾದಲ್ಲಿ ನಡೆದ ಆಟೋಟಗಳ ತರಬೇತುದಾರರಾಗಿ ಕಾರ್ಯ ನಿರ್ವಹಿಸಲು ಯುವ ಜನ ಸೇವಾ ಇಲಾಖೆಯಿಂದ ಆಯ್ಕೆಯಾಗಿದ್ದರು. ಆ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿ ಹಿಂದಿರುಗಿದ್ದಾರೆ.

## ಮಂಡ್ಯ

ಜೈ ಹಿಂದ ಓಪನ್ ಸ್ಕೌಟ್ಸ್ ಗ್ರೂಪನ ರೋವರ್‌ಗಳು ಹಾಗೂ ಸ್ಕೌಟ್ಸ್‌ಗಳು ದಿನಾಂಕ 29.07.01ರಂದು ಮಂಡ್ಯ ಜಿಲ್ಲೆಯ ಇಂಡುವಾಳು ಗ್ರಾಮದ ಕಾರಸ್ವಾಡಿ ಕಾಲುವೆಯ ಟ್ರ್ಯೂಬ್‌ಗೆ ಕೃತಕ ಸೇತುವೆ ಕಟ್ಟಿರುತ್ತಾರೆ. ಇದರ ನಾಯಕತ್ವವನ್ನು ಎನ್. ಅಶೋಕ ಕುಮಾರ ರವರು ವಹಿಸಿರುತ್ತಾರೆ. ಇವರ ಜೊತೆಯಲ್ಲಿ ಇತರ ರೋವರ್‌ಗಳು ಹಾಗೂ ಸ್ಕೌಟ್ಸ್‌ಗಳು ಸಹಕಾರಿಯಾಗಿದ್ದರು.



ಪಯೊನಿಯರಿಂಗ್ ಚಟುವಟಿಕೆಯಲ್ಲಿ ಮಂಡ್ಯದ ರೋವರ್ಸ್‌ಗಳು

## ದಕ್ಷಿಣ ಕನ್ನಡ

ತೃತೀಯ ಸೋಪಾನ ಪ್ರಶಸ್ತಿ ಪ್ರದಾನ ಸಮಾರಂಭ

ದಕ್ಷಿಣ ಕನ್ನಡ ಜಿಲ್ಲೆಯ 2000-2001ನೇ ಸಾಲಿನಲ್ಲಿ ತೃತೀಯ ಸೋಪಾನ ಪರೀಕ್ಷೆ ಪೂರೈಸಿ ತೇರ್ಗಡೆ ಹೊಂದಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದಿನಾಂಕ 19-08.2001 ರಂದು ಮಾನ್ಯ ಜಿಲ್ಲಾಧಿಕಾರಿಗಳ ನಿವಾಸದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಏರ್ಪಡಿಸಲಾಯ್ತು.



ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಪೊನ್ನಪ್ಪನವರು ಮಾತನಾಡುತ್ತಿರುವುದು



ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಸ್ಕೌಟ್ ಮಕ್ಕಳು

ಸಮಾರಂಭದಲ್ಲಿ ಮಾನ್ಯ ಜಿಲ್ಲಾಧಿಕಾರಿಗಳ ಶ್ರೀಮತಿಯವರು, ಜಿಲ್ಲಾ ಹೋಮ್ ಗಾರ್ಡ್ ಕಮಾಂಡೆಂಟ್ ಶ್ರೀ ಶಿವಪ್ರಸಾದ್ ರೈ ಅವರುಗಳು ಅಥಿತಿಗಳಾಗಿ ಭಾಗವಹಿಸಿದ್ದರು.

ಜಿಲ್ಲಾ ಕಾರ್ಯದರ್ಶಿ ಲೆ. ಎಡ್ವಿನ್ ವಾಲ್ಬರ್ ಸ್ವಾಗತಿಸಿದರು. ಜಿಲ್ಲಾ ಕಾರ್ಯಾಧ್ಯಕ್ಷ ಶ್ರೀ ಐ.ಎ. ಕೈರನ್ನ ಪ್ರಾಸ್ತಾವಿಕವಾಗಿ ಮಾತನಾಡಿದರು.

ಪ್ರಶಸ್ತಿ ಪತ್ರ ವಿತರಿಸಿ ಮಾತನಾಡಿದ ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಮೊನ್ನಪ್ಪ ಜಿಲ್ಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿರುವ ಕೋಮುಗಲಭೆಯನ್ನು ಪ್ರಸ್ತಾವಿಸಿ ಸ್ಕೌಟ್ಸ್ ಗೈಡ್ಸ್‌ಗಳು ಕೋಮು ಸೌಹಾರ್ದತೆಗಾಗಿ ಶ್ರಮಿಸಬೇಕು, ಸಮಾಜದಲ್ಲಿ ಶಾಂತಿ ಸಾಮರಸ್ಯ ಮೂಡಿಸಲು ಪ್ರಯತ್ನಿಸಬೇಕು. ಕೇವಲ ಸಾಕ್ಷರತೆಯಿಂದ ಮಾತ್ರ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಿಲ್ಲ ಸಾಕ್ಷರತೆಯೊಂದಿಗೆ ಜನ ಜಾಗೃತಿ ಅಗತ್ಯ ಎಂದರು. ಇದೇ ಸಂದರ್ಭ ರಾಷ್ಟ್ರಪತಿಗಳಿಂದ ಹೋಂಗಾರ್ಡ್ಸ್ ವಿಭಾಗದಲ್ಲಿ ಪದಕ ಪಡೆದ ಶ್ರೀ ಶಿವಪ್ರಸಾದ್ ರೈ ಅವರನ್ನು ಜಿಲ್ಲಾಧಿಕಾರಿಗಳು ಸನ್ಮಾನಿಸಿದರು. ಮನರಂಜನಾ ಕಾರ್ಯಕ್ರಮದ ಅಂಗವಾಗಿ ವಾಮಂಜೂರಿನ ವರ್ಕರ್ಸ್ ಹಿ.ಪ್ರಾ.ಶಾಲೆಯ ಕಬ್ಸ್, ಮುಲ್ಕಿಯ ಶ್ರೀ ನಾರಾಯಣ ಗುರು ಆಂಗ್ಲ ಮಾಧ್ಯಮ ಶಾಲೆಯ ಬುಲ್ ಬುಲ್ಸ್, ಹರೇಕಳ ಶ್ರೀ ರಾಮಕೃಷ್ಣ ಪ್ರೌಢ ಶಾಲೆಯ ಸ್ಕೌಟ್ಸ್‌ಗಳಿಂದ ಜಾನಪದ ಕುಣಿತ ನಡೆಯಿತು. ಮಂಗಳೂರಿನ ಕೆನರ ಬಾಲಿಕಾ ಪ್ರೌಢ ಶಾಲೆಯ ಗೈಡ್ಸ್‌ಗಳಿಂದ ದೇಶ ಭಕ್ತಿ ಗೀತ ಗಾಯನ ನಡೆಯಿತು. ಶ್ರೀಮತಿ ಐರಿನ್ ಡಿ. ಕುನ್ನ, ಶ್ರೀಮತಿ ಮೊನ್ನಪ್ಪ ಅವರನ್ನು ಸನ್ಮಾನಿಸಿದರು. ಶ್ರೀ ಯು.ಗೋಪಾಲಕೃಷ್ಣ ಭಟ್ ಅವರು ಕಾರ್ಯಕ್ರಮ ನಿರ್ವಹಿಸಿದರು.

## ರಾಜ್ಯವಾರ್ತೆ

ರಾಜ್ಯ ಮಟ್ಟದ ಮುಂದುವರೆದ ಸ್ಕೌಟ್ ಮಾಸ್ಟರ್, ಕಬ್‌ಮಾಸ್ಟರ್‌ಗಳ ತರಬೇತಿ ಶಿಬಿರ ದಿನಾಂಕ 6.8.2001 ರಿಂದ 13.8.2001 ರವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ ಮತ್ತು ಗೈಡ್ ತರಬೇತಿ ಕೇಂದ್ರದಲ್ಲಿ ಜರುಗಿತು. ವಿವರ ಈ ರೀತಿ ಇದೆ.

| ಸಂಖ್ಯೆ | ತರಬೇತಿ ಶಿಬಿರಗಳು | ನಾಯಕರು | ಭಾಗವಹಿಸಿದ ಸಂಖ್ಯೆ |
|---|---|---|---|
| 1. | ಸ್ಕೌಟ್‌ಮಾಸ್ಟರ್‌ಗಳ ಮುಂದುವರೆದ ತರಬೇತಿ ಶಿಬಿರ | ಶ್ರೀ ಎಂ.ಆರ್. ಪಾಟೀಲ್ ALT(S) | 32 |
| 2. | ಸ್ಕೌಟ್ ಮಾಸ್ಟರ್‌ಗಳ ಮುಂದುವರೆದ ತರಬೇತಿ ಶಿಬಿರ | ಶ್ರೀ ಜೆ.ಎ. ಮನಿಯಾರ್ ALT(S) | 30 |
| 3. | ಕಬ್ ಮಾಸ್ಟರ್‌ಗಳ ಮುಂದುವರೆದ ತರಬೇತಿ ಶಿಬಿರ | ಶ್ರೀಮತಿ ಹೇಮಾ ವಿಜಯ ಕುಮಾರ್ LT(C) | 26 |

ಶ್ರೀಮಹಮದ್ ವಾಸಿಲ್ ಎಲ್‌ಟಿ(ಎಸ್) ಹಾಗೂ ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌಟ್) ಶ್ರೀ ನಾರಾಯಣ ಶೆಟ್ಟಿ ಎಲ್‌ಟಿ(ಎಸ್) ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಇವರುಗಳು ಶಿಬಿರಗಳ ಮೇಲ್ವಿಚಾರಕರಾಗಿದ್ದರು.

ದಿನಾಂಕ 10.7.2001 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮತ್ತು ಸಹಾಯಕ ರಾಜ್ಯ ಆಯುಕ್ತರಾದ (ಯೋಜನೆ ಮತ್ತು ಅಭಿವೃದ್ಧಿ) ಪ್ರೊ ಎಂ. ಸೂರ್ಯನಾರಾಯಣಪ್ಪನವರು ಶಿಬಿರಕ್ಕೆ ಭೇಟಿ ನೀಡಿದ್ದರು.

ದಿನಾಂಕ 12.8.2001 ರಂದು ಕೊಪ್ಪಳ ಜಿಲ್ಲಾ ಉಪನಿರ್ದೇಶಕರಾದ ಶ್ರೀ ರಾಮಲಿಂಗಪ್ಪನವರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಹಿತ ನುಡಿ ನುಡಿದು ಎಲ್ಲಾ ಶಾಲೆಗಳಲ್ಲೂ ಸ್ಕೌಟ್ ಗೈಡ್ ದಳಗಳು ಪ್ರಾರಂಭಿಸಬೇಕೆಂದು ಮನವಿ ಮಾಡಿದರು.

## ಸ್ವಾತಂತ್ರ ದಿನಾಚರಣೆ

ಬೆಂಗಳೂರು ಫೀಲ್ಡ್ ಮಾರ್ಷಲ್ ಮಣೇಕ್ ಷಾ ಮೈದಾನದಲ್ಲಿ ನಡೆದ ಸಮಾರಂಭ ಮತ್ತು ಪೇರೇಡ್‌ನಲ್ಲಿ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಪರವಾಗಿ ಒಂದು ಸ್ಕೌಟ್ಸ್ ಮತ್ತು ಒಂದು ಗೈಡ್ಸ್ ತಂಡ ಭಾಗವಹಿಸಿತ್ತು. ಇದೇ ಸಮಾರಂಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರು ಭಾಗವಹಿಸಿ ಧ್ವಜಾರೋಹಣ ಮಾಡಿ ಎನ್.ಸಿ.ಸಿ. ಎನ್.ಎಸ್.ಎಸ್. ಅರಕ್ಷಕದಳ, ಭೋಸೇನೆ, ವಾಯುಸೇನೆ ಜೊತೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಪಂಥಸಂಚಲನ ವೀಕ್ಷಿಸಿದರು.

### ಕೇಂದ್ರ ಕಛೇರಿಯಲ್ಲಿ ಧ್ವಜಾರೋಹಣ

ಸ್ವಾತಂತ್ರ್ಯ ದಿನಾಚರಣೆ ಸಂದರ್ಭದಲ್ಲಿ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಧ್ವಜಾರೋಹಣ ಮಾಡಿ ನೆರೆದಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ಈ ಸಮಾರಂಭದಲ್ಲಿ ಹಿರಿಯರಾದ ಮೇಜರ್ ಎಂ.ಆರ್. ನಾರಾಯಣ್ ಸಿಂಗ್, ಉಪಾಧ್ಯಕ್ಷರು, ಶ್ರೀ ಗೊ.ರು. ಚನ್ನಬಸಪ್ಪ ಸಹಾಯಕ ರಾಜ್ಯ ಆಯುಕ್ತರು ಮತ್ತು ಶ್ರೀ ಟಿ. ಎಸ್. ಲೂಕಾಸ್, ರಾಜ್ಯ ಕಾರ್ಯದರ್ಶಿ ಮತ್ತು ರಾಜ್ಯ ಸಂಸ್ಥೆಯ ಇತರೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

### ಜಿಲ್ಲಾ ಮಟ್ಟದಲ್ಲಿ ಸ್ವಾತಂತ್ರ್ಯೋತ್ಸವ

ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಡಳಿತ ವತಿಯಿಂದ ಏರ್ಪಡಿಸಿದ್ದ ಸಾರ್ವಜನಿಕ ಸ್ವಾತಂತ್ರ್ಯೋತ್ಸವ ಸಭೆಗಳಲ್ಲಿ ಆಯಾ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿರುತ್ತಾರೆ.

***Welcome to 24th Jamborette of Karnataka State, Belgaum***

*Jamborette Theme*

## THE GLOBE IS MY VILLAGE

### *What is A Jamborette*

★ It is a gathering of Scouts and Guides who are uniformed members of the largest International Youth Movement.
★ It is an opportunity to exchange ideas and talents.
★ It is an oppourtunity to exhibit the spirit of Brotherhood/Sisterhood.
★ It is an opportunity to display skills of Scouts and Guides.
★ It is an opportunity to depict the activities of Scouting and Guiding in action.
★ It is an opportunity to create an awareness among youth about values of National Integration, Peaceful Life & Patriotism.
★ It is an occasion to renew friendship and make new friends.

The Venue : **AIR FORCE TRAINING GROUNDS**, Chougule Wadi, Tilak Wadi, Belgaum - 590 006

***Distance from : Central Bus Stand : 6 Kms, City Railway Station : 3 Kms.***

## GENERAL INFORMATION ON THE JAMBORETTE

***When ? 4th to 10th Dec- 2001***

***Who can attend?***

Scouts/Guides who have completed Trithiya Sopan and 13 years of age, having camping experience, sufficiently with good health to bear the strain of the journey, and having experience of living under canvas.

***Registration***

The District Association should register names of the Scouts and Guides along with scouters and Guiders according to quota allotted to them by remitting Rs. 25/- per head as Registration Fee to the State Secretary, The Bharat Scouts and Guides, Karnataka, State Headquarters, Prof. P. Sivashankar Circle, Kondajji Basappa Road, Fort, Bangalore-2 positively before 10th November 2001.

## ABOUT BELGAUM

Belgaum is a very old city dating back to 225 B.C. Known as "Venugram" in those days as it was full of bamboo forests. The City of Belgaum is ideally situated on the border of Goa, Maharashtra and Karnataka at a height of 2400 feet above the sea level. It enjoys a very healthy and cool climate and is hence known as poor man's hill station. It is surrounded by Sahyadri Mountains on the west and tiny hill forts like Rajhauns gad, Mahipal gad and Ramteerth on the east. The evergreen forests add to the beauty of Belgaum District.

This is the Land of "KITTUR RANI CHANNAMMA" the first Lady Warrior who fought against the British Rulers.

Belgaum City is a very attractive town, with a population of about 4 lakhs. This is the seat of Maratha Light Infantry, the famous Armed Force, Religious place like Bacadis, Churches, Masjids, Mandirs and Temples, add to the Spiritual dimensions of the city.

Belgaum is the centre of many Educational Institutions and many Major & medium industries are situated in Belgum City. The District is famous for commercial crops like Sugarcane, Tobacco.

***For Further details See Bulletin-II***

***A Nation to be powerful and prosperous must be well disciplined; and you only get discipline in the Mass by discipline in the individual***

***B.P***

# ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ, ಹೊಸ ಸಾರ್ವಜನಿಕ ಕಛೇರಿಗಳು, ನೃಪತುಂಗ ರಸ್ತೆ, ಬೆಂಗಳೂರು-1

ಸಂಖ್ಯೆ : ದೈಶಿ2:ಸ್ಕೌ.ಗೈ:ಕಾ.ವಿ.10:2001-02 ದಿನಾಂಕ 23-08-2001

## ಜ್ಞಾಪನಾ

ವಿಷಯ : *ದಿನಾಂಕ : **4.12.2001** ರಿಂದ **10.12.2001**ರ ವರೆಗೆ ರಾಜ್ಯಮಟ್ಟದ **24**ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ಸ್ ಕಾರ್ಯಕ್ರಮ ಬೆಳಗಾವಿಯಲ್ಲಿ ನಡೆಯುವ ಕುರಿತು*

ಉಲ್ಲೇಖ : *ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕರ್ನಾಟಕ ಇವರ ಪತ್ರ ಸಂಖ್ಯೆ : ಬಿಎಸ್‌ಜಿ : ಎಸ್.ಹೆಚ್.ಕ್ಯೂ.**24** : ಜಾಂ. **533:2001-02** ದಿನಾಂಕ : **28.07.2001***

**ಪೀಠಿಕೆ :**

ದಿನಾಂಕ : 04.12.2001 ರಿಂದ 10.12.2001ರವರೆಗೆ ವಾಯುಪಡೆ ತರಬೇತಿ ಮೈದಾನ, ಚಾಗಲವಾಡಿ, ತಿಲಕವಾಡಿ, ಬೆಳಗಾಂ ನಗರದಲ್ಲಿ ರಾಜ್ಯಮಟ್ಟದ 24ನೇ ಕರ್ನಾಟಕರಾಜ್ಯ ಜಾಂಬೋರೇಟನ್ನು ನಡೆಸುವುದಾಗಿಯೂ ಮತ್ತು ಜಾಂಬೋರೇಟ್‌ನಲ್ಲಿ ರಾಜ್ಯದ ಎಲ್ಲಾ ಶಾಲಾ ಕಾಲೇಜುಗಳಲ್ಲಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಲು ಅನುಮತಿಯನ್ನು ಹಾಗೂ ಭಾಗವಹಿಸಲು ತಗಲುವ ವೆಚ್ಚ ಅಂದರೆ ಪ್ರತಿ ಸ್ಕೌಟ್ ಮತ್ತು ಗೈಡ್ಸ್ ನೊಂದಣಿ ಶುಲ್ಕ ರೂ. 25.00, ಊಟ ಮತ್ತು ಉಪಹಾರ ವೆಚ್ಚ ಪ್ರತಿ ದಿನಕ್ಕೆ ತಲಾ ರೂ. 30.00 ರಂತೆ ಹತ್ತು ದಿನಗಳಿಗೆ ರೂ. 300.00 ಮತ್ತು ಬೆಳಗಾಂಗೆ ಹೋಗಿ ಬರುವ ವಾಸ್ತವಿಕ ಬಸ್ ಅಥವಾ 2ನೇ ದರ್ಜೆ ರೈಲ್ವೆ ದರವನ್ನು ಆಯಾ ಶಾಲೆಯ ಸಂಚಿತ ನಿಧಿಯಿಂದ ಭರಿಸಲು ಅನುಮತಿ ಕೋರಿರುತ್ತಾರೆ. ಹಾಗೂ ದಿನಾಂಕ : 04.12.2001 ರಿಂದ ದಿನಾಂಕ 24.12.2001 ರವರೆಗೆ ಭಾಗವಹಿಸುವ ಸ್ಕೌಟ್ಸ್ ಮತ್ತು ಗೈಡ್ಸ್ ಒಬ್ಬ ಸ್ಕೌಟರ್, ಒಬ್ಬ ಗೈಡರ್‌ಗೆ ಈ ಅವಧಿಗೆ (ಪ್ರಯಾಣದ ದಿನಗಳು ಸೇರಿದಂತೆ) ಇವರ ಗೈರುಹಾಜರಿಯನ್ನು "ಅನ್ಯ ಕಾರ್ಯ ನಿಮಿತ್ತ" ಎಂದು ಪರಿಗಣಿಸುವಂತೆ ಆದೇಶ ನೀಡುವಂತೆ ಕೋರಿರುತ್ತಾರೆ. ಸದರಿರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ :**

ಭಾರತ್ ಸ್ಕೌಟ್ ಮತ್ತು ಗೈಡ್ಸ್‌ನವರು ರಾಜ್ಯಮಟ್ಟದ 24ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್,

ಜಾಂಬೋರೇಟ್ ಕಾರ್ಯಕ್ರಮವನ್ನು ದಿನಾಂಕ : 04.12.2001 ರಿಂದ 10.12.2001 ರವರೆಗೆ ಬೆಳಗಾವಿ ಜಿಲ್ಲೆಯ ವಾಯುಪಡೆ ತರಬೇತಿ ಮೈದಾನ, ಚಾಗಲವಾಡಿ,ತಿಲಕವಾಡಿ ಇಲ್ಲಿ ನಡೆಸಲಿರುವರು. ಸದರಿ ಜಾಂಬೋರೇಟ್‌ನಲ್ಲಿ ರಾಜ್ಯದ ಶಾಲಾ ಕಾಲೇಜುಗಳಲ್ಲಿ ರುವ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳಿಂದ 8 ಮಂದಿ ಸ್ಕೌಟ್ ಮತ್ತು 8 ಮಂದಿ ಗೈಡ್ಸ್ ಹಾಗೂ ಆರಿಸಲ್ಪಟ್ಟ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಜೊತೆಯಲ್ಲಿ ಒಬ್ಬರು ಸ್ಕೌಟರ್ ಮತ್ತು ಒಬ್ಬರು ಗೈಡರ್ (ಶಾಲಾ ದೈಹಿಕ ಶಿಕ್ಷಣ ಶಿಕ್ಷಕರು ಅಥವಾ ಶಿಕ್ಷಕ : ಶಿಕ್ಷಕಿ) ಭಾಗವಹಿಸಲು ಅನುಮತಿ ನೀಡಿದೆ. ಮತ್ತು ಕಾರ್ಯಕ್ರಮದಲ್ಲಿ ಭಾಗವಹಿಸುವವರು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಹಾಗೂ ಸ್ಕೌಟರ್ ಮತ್ತು ಗೈಡರ್‌ಗಳಿಗೆ ಪ್ರಯಾಣದ ದಿನಗಳು ಸೇರಿದಂತೆ ದಿನಾಂಕ : 04.12.2001 ರಿಂದ 10.12.2001 ರವರೆಗೆ ''ಅನ್ಯಕಾರ್ಯನಿಮಿತ್ತ'' ಎಂದು ಪರಿಗಣಿಸಲು ಅನುಮತಿ ನೀಡಿದೆ.

ಈ ರೀತಿ ಆರಿಸಲ್ಪಟ್ಟ ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಕರಿಗೆ ನೊಂದಣಿ ಶುಲ್ಕ ರೂ. 25.00ಗಳು ದಿನಾಂಕ : 04.12.2001 ರಿಂದ 10.12.2001 ರವರೆಗೆ 10 ದಿನಗಳವರೆಗಿನ ಪ್ರತಿ ದಿನಕ್ಕೆ ರೂ. 30.00 ರಂತೆ ಊಟ ಮತ್ತು ಉಪಹಾರ ವೆಚ್ಚ ರೂ. 300.00ಗಳನ್ನು ಆಯಾಯ ಶಾಲೆಗಳಿಂದ ಜಾಂಬೋರೇಟ್ ನಡೆಯುವ ಸ್ಥಳಕ್ಕೆ ಹೋಗಿ ಬರಲು ವಾಸ್ತವಿಕ ಬಸ್‌ದರ ಅಥವಾ 2ನೇ ದರ್ಜೆ ರೈಲ್ವೆ ದರವನ್ನು ಆಯಾಯ ಶಾಲೆಯಲ್ಲಿ ವಸೂಲಾದ ಸ್ಕೌಟ್ಸ್ ಮತ್ತು ಗೈಡ್ಸ್ ಶುಲ್ಕದ ಚಾಲ್ತಿ : ಸಂಚಿತ ನಿಧಿಯಿಂದ ಭರಿಸಲು ಅನುಮತಿ ನೀಡಿದೆ. ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳಿಗೆ ತಿಳಿಸಿದೆ.

''ನಿರ್ದೇಶಕರು (ಪ್ರೌಢ ಶಿಕ್ಷಣ) ರವರ ಆದೇಶದ ಮೇರೆಗೆ''

ಸಹಿ

ನಿರ್ದೇಶಕರು (ಪ್ರೌಢ ಶಿಕ್ಷಣ) ಪರವಾಗಿ

ಗೆ :

1. ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆ ಮುಂದಿನ ಸೂಕ್ತ ಕ್ರಮಕ್ಕಾಗಿ.
2. ರಾಜ್ಯದ ಎಲ್ಲಾ ವಿಭಾಗೀಯ ಸಹ ನಿರ್ದೇಶಕರುಗಳಿಗೆ ಮಾಹಿತಿಗಾಗಿ.
3. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಸೂಕ್ತ ಕ್ರಮಕ್ಕಾಗಿ.
4. ರಾಜ್ಯ ಮುಖ್ಯ ಆಯುಕ್ತರು, ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆ, ಕೊಂಡಜ್ಜಿ ಬಸಪ್ಪ ರಸ್ತೆ, ಬೆಂಗಳೂರು.
5. ಕಛೇರಿ ಪ್ರತಿ.

## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಭಾರತ ಸೇವಾದಲ ತಂಡಗಳು ಕಾರ್ಯನಿರ್ವಹಿಸುತ್ತಿರುವ ಶಾಲೆಗಳಲ್ಲಿ ಮಕ್ಕಳಿಂದ ನೋಂದಣಿ ಶುಲ್ಕ ವಸೂಲಾತಿ ಮಾಡುವ ಬಗ್ಗೆ ಸರ್ಕಾರದ ನಡವಳಿಯ ಯಥಾ ಪ್ರತಿ

## ಕರ್ನಾಟಕ ಸರ್ಕಾರದ ನಡವಳಿಗಳು

*ವಿಷಯ : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಹಾಗೂ ಭಾರತ ಸೇವಾ ದಳ ತಂಡಗಳು ಕಾರ್ಯ ಚಟುವಟಿಕೆ ನಡೆಸುತ್ತಿರುವ ಶಾಲೆಗಳಲ್ಲಿ ಮಕ್ಕಳಿಂದ ನೋಂದಣಿ ಶುಲ್ಕ ವಸೂಲಾತಿ ಮಾಡುವ ಬಗ್ಗೆ - ಆದೇಶ*

*ಉಲ್ಲೇಖ : ನಿರ್ದೇಶಕರು ( ಪ್ರಾ.ಶಿ ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ : ದೈ ಶಿ4 : ಭಾ : ಸೇ : ದ: ನೋ : ಶುಲ್ಕ : **05.2000-01,** ದಿನಾಂಕ **3.4.2001***

**ಪ್ರಸ್ತಾವನೆ :**

ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರು (ಪ್ರಾ.ಶಿ.) ಮೇಲೆ ಓದಲಾದ ಪತ್ರದಲ್ಲಿ ಭಾರತ ಸ್ಕೌಟ್ ಅಂಡ್ ಗೈಡ್ಸ್ ಸಂಸ್ಥೆ, ಬೆಂಗಳೂರು ಹಾಗೂ ಭಾರತ ಸೇವಾದಲ ಕೇಂದ್ರ ಕಛೇರಿ, ಶಾಲೆಗಳ ಮಕ್ಕಳಿಂದ ವಾರ್ಷಿಕ ತಲಾ 2.00 ರೂಪಾಯಿಗಳನ್ನು ನೋಂದಣಿ ಶುಲ್ಕವಾಗಿ ಪಡೆಯುತ್ತಿದ್ದು, ಈ ಮೊಬಲಗು ಶಾಲೆಗಳಲ್ಲಿ ಈ ತಂಡಗಳು ನಡೆಸುವ ಕಾರ್ಯಚಟುವಟಿಕೆಗಳಿಗೆ ಸಾಕಾಗುವುದಿಲ್ಲವೆಂದು ಹಾಗೂ ಚಟುವಟಿಕೆಗಳನ್ನು ಮತ್ತಷ್ಟು ಸುಸೂತ್ರವಾಗಿ ನಡೆಸುವ ಸಲುವಾಗಿ ಪ್ರಸ್ತುತ ವಸೂಲು ಮಾಡುತ್ತಿರುವ ರೂ. 2.00 ನ್ನು ರೂ. 10.00 ಗಳಿಗೆ ಹೆಚ್ಚಿಸಲು ಕೋರಿಕೆ ಸಲ್ಲಿಸಿರುವುದರಿಂದ ಈ ಬಗ್ಗೆ ಸರ್ಕಾರದ ವತಿಯಿಂದ ಅನುಮತಿ : ಆದೇಶ ಕೋರಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ : ಇಡಿ 13 ಪಿಬಿಎಸ್ 2001 ಬೆಂಗಳೂರು ದಿನಾಂಕ : 4.8.2001

ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿದ್ದು, ಭಾರತ ಸೇವಾದಲ ಹಾಗೂ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳು ಕಾರ್ಯನಿರ್ವಹಿಸುತ್ತಿರುವ ಶಾಲೆಗಳಲ್ಲಿನ ಮಕ್ಕಳಿಂದ ನೋಂದಣಿ ಶುಲ್ಕವಾಗಿ ಪಡೆಯುತ್ತಿರುವ ವಾರ್ಷಿಕ ತಲಾ ರೂ. 2.00 ಗಳಿಂದ ರೂ. 5.00ಕ್ಕೆ (ಐದು ರೂಪಾಯಿಗಳು ಮಾತ್ರ) ಪರಿಷ್ಕರಿಸಿ ವಸೂಲಿ ಮಾಡಲು ಸರ್ಕಾರವು ಅನುಮತಿಸಿದೆ.

ಈ ಸಂಬಂಧದಲ್ಲಿ ವಸೂಲಾದ ವಂತಿಗೆಯನ್ನು ಬಾರತ ಸೇವಾದಲ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಿಗಾಗಿಯೇ ವಿನಿಯೋಗಿಸತಕ್ಕದ್ದು.

ಪು.ತಿ.ನೋ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಟಿಪ್ಪಣಿ ಸಂಖ್ಯೆ : ಆಇ 514 ವೆಚ್ಚ-8 :2001, ದಿನಾಂಕ : 06.07.2001ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
ಸಹಿ
(ಎಂ.ಸಿ. ಪೂಣಚ್ಚ)
ಸರ್ಕಾರ ಅದೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

## ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ ಬೆಂಗಳೂರು - 1

**ಸಂಖ್ಯೆ : ದೈಶಿ 2 : ಸ್ಕಾ : ಗೈ : 10 : 97-98** **ದಿನಾಂಕ : 18.08.2001**

## ಸುತ್ತೋಲೆ

ಭಾರತ ಸೇವಾದಲ ಮತ್ತು ಭಾರತ ಸ್ಕೌಟ್ಸ್ ಅಂಡ್ ಗೈಡ್ಸ್ ತಂಡಗಳು ಕಾರ್ಯನಿರ್ವಹಿಸುತ್ತಿರುವ ಶಾಲೆಗಳಲ್ಲಿನ ಮಕ್ಕಳಿಂದ ನೋಂದಣಿ ಶುಲ್ಕ ವಸೂಲಾತಿ ಮಾಡುವ ಬಗ್ಗೆ ಸರ್ಕಾರದ ಆದೇಶದ ಯಾವ ಪ್ರತಿಯನ್ನು ಈ ಮೂಲಕ ತಮ್ಮ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸುತ್ತಾ, ಆದೇಶದಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳಲು ಸೂಚಿಸಿದೆ

ಸಹಿ
**( ಬಿ.ಟಿ. ಪೆಮ್ಮಯ್ಯ )**
ನಿರ್ದೇಶಕರು (ಪ್ರೌಢ ಶಿಕ್ಷಣ)

ಗೆ.

1. ರಾಜ್ಯದ ಎಲ್ಲಾ ವಿಭಾಗೀಯ ಸಹ ನಿರ್ದೇಶಕರು, ಸಾ.ಶಿ.ಇ. ಮಾಹಿತಿಗಾಗಿ
2. ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳಿಗೆ ಸಾ.ಶಿ.ಇ. - ಮುಂದಿನ ಕ್ರಮಕ್ಕಾಗಿ
3. ರಾಜ್ಯದ ಎಲ್ಲಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ
4. ರಾಜ್ಯದ ಎಲ್ಲಾ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರುಗಳಿಗೆ
5. ಪ್ರಧಾನ ಕಾರ್ಯದರ್ಶಿಗಳು ಭಾರತ ಸೇವಾದಲ, ಬೆಂಗಳೂರು
6. ರಾಜ್ಯದ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕೋಟೆ, ಬೆಂಗಳೂರು
7. ಕಛೇರಿ ಪ್ರತಿ



# ಸ್ಕೌಟ್ ಮಾಸ್ಟರ್

ಮೂಲ : ಲಾರ್ಡ್ ಬೇಡನ್ ಪೊವೆಲ್
ಭಾವಾನುವಾದ : ಗೊ.ರು. ಚನ್ನಬಸಪ್ಪ

ಸ್ಕೌಟ್ ಮಾಸ್ಟರ್ ಆಗಬೇಕೆನ್ನುವವರಿಗೆ ಮೊದಲು ಒಂದು ಸಮಾಧಾನದ ಮಾತು: ಯಶಸ್ವಿ ಸ್ಕೌಟ್ ಮಾಸ್ಟರ್ ಆಗಬೇಕಾದ ವ್ಯಕ್ತಿ ಎಲ್ಲರೂ ಮೆಚ್ಚುವಂತಹ ಓರ್ವ ಸರ್ವಜ್ಞನಾಗಿರಬೇಕೆಂದಿರುವ ಸಾಮಾನ್ಯ ತಪ್ಪು ಕಲ್ಪನೆಯನ್ನು ನಾನು ವಿರೋಧಿಸಲಿಚ್ಛಿಸುತ್ತೇನೆ. ವಾಸ್ತವವಾಗಿ ಅದು ಅಲ್ಲವೇ ಅಲ್ಲ.

ಅವನು ಕೇವಲ ಓರ್ವ ಹಿರಿಯ ಬಾಲ ಚಮೂ ಅಂದರೆ :

1. ಅವನಲ್ಲಿ ಬಾಲ ಚಮೂವಿನ ಉತ್ಸಾಹವಿರಬೇಕು, ಮತ್ತು ಮೊದಲ ಹೆಜ್ಜೆಯಾಗಿ, ಅವನು ತನ್ನ ಬಾಲಕರೊಂದಿಗೆ ತನ್ನ ಸರಿಯಾದ ಸ್ಥಾನಮಾನವನ್ನು ಉಳಿಸಿಕೊಂಡು ಬರಲು ಸಮರ್ಥನಾಗಿರಬೇಕು.
2. ಬೇರೆ ಬೇರೆ ವಯಸ್ಸಿನ ಬಾಲ್ಯ ಜೀವನದ ಆಗತ್ಯಗಳು, ಮನೋಭಾವಗಳು ಮತ್ತು ಅಪೇಕ್ಷೆಗಳನ್ನು ಅರ್ಥಮಾಡಿಕೊಳ್ಳಬೇಕು.
3. ಅವನು ಸಮೂಹಕ್ಕಿಂತ ಮಿಗಿಲಾಗಿ, ವೈಯಕ್ತಿಕ ಬಾಲ ಚಮೂವಿನೊಡನೆ ವ್ಯವಹರಿಸಬೇಕು.
4. ಅತ್ಯುತ್ತಮ ಫಲಿತಾಂಶವನ್ನು ಪಡೆಯಲು ತನ್ನ ಬಾಲಕರಲ್ಲಿ ಒಂದು ಸಾಂಘಿಕ ಹುರುಪನ್ನು ಉತ್ತೇಜಿಸಬೇಕು.

ಮೊದಲ ಅಂಶಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಸ್ಕೌಟ್ ಮಾಸ್ಟರನು ಶಾಲಾ ಉಪಾಧ್ಯಾಯನಾಗಲೀ, ಸೈನ್ಯಾಧಿಕಾರಿಯಾಗಲೀ ಆಗಬೇಕಾಗಿಲ್ಲ. ಒಟ್ಟಿನಲ್ಲಿ ಬೇಕಾಗಿರುವುದು ಹೊರ ಜಗತ್ತಿನಲ್ಲಿ ನಲಿಯುವ, ಹುಡುಗರ ಆಕಾಂಕ್ಷೆಗಳನ್ನು ಅರಿಯುವ ಸಾಮರ್ಥ್ಯ ಮತ್ತು ಸಂಕೇತ ಸೂಚನೆ (Signalling) ಇರಲಿ, ರೇಖಿನ ಕಲೆ (Drawing) ಇರಲಿ, ಅಥವಾ ಪ್ರಕೃತಿ ಪಾಠ (Nature Study) ಇರಲಿ, ಮಾರ್ಗದರ್ಶನ (Pioneering) ಆಟವಿರಲಿ ಹುಡುಗರಿಗೆ ಅಗತ್ಯ ಮಾರ್ಗದಲ್ಲಿ ಶಿಕ್ಷಣ ಕೊಡುವಂತಹ ವ್ಯಕ್ತಿಗಳನ್ನು ಕಂಡುಕೊಳ್ಳುವ ಶಕ್ತಿ.

ಅವರು ಸ್ವಯಂ ಹಿರಿಯಣ್ಣನ ಸ್ಥಾನವನ್ನು ಗಳಿಸಿಕೊಳ್ಳಬೇಕು, ಅಂದರೆ, ಹುಡುಗರ ದೃಷ್ಟಿಕೋನದಿಂದ ವಿಚಾರಮಾಡುವುದು ಮತ್ತು ಸರಿಯಾದ ಮಾರ್ಗದಲ್ಲಿ ಅವರನ್ನು ಕರೆದೊಯ್ಯು, ಮಾರ್ಗದರ್ಶನ ಮಾಡಿ, ಅವರಲ್ಲಿ ಉತ್ಸಾಹ ತುಂಬುವುದು. ನಿಜವಾದ ಹಿರಿಯಣ್ಣನಂತೆ, ಸ್ಕೌಟ್ ಕುಟುಂಬದ ಸಂಪ್ರದಾಯಗಳನ್ನು ಅರ್ಥಮಾಡಿಕೊಂಡು, ಗಣನೀಯ ಅಚಲತೆ ಅಗತ್ಯವಾದರೂ ಆ ಸಂಪ್ರದಾಯಗಳು ರಕ್ಷಣೆಯಾಗುವಂತೆ ನೋಡಿಕೊಳ್ಳಬೇಕು. ಅಷ್ಟಾದರೆ ಸಾಕು. ಚಳುವಳಿಯು ಒಂದು ಹರ್ಷದಾಯಕ ಸಂಘಟನೆ. ಇದು ಇಷ್ಟು ಹರ್ಷದಾಯಕವೇಕೆಂದರೆ, ಸ್ಕೌಟಿಂಗ್ ಆಟ'ದಲ್ಲಿ ನೀವು ಇತರರಿಗಾಗಿ ದೊಡ್ಡ ಕೆಲಸ ಮಾಡುತ್ತೀರಿ; ಸ್ವಾರ್ಥತೆಯ ಸಂತಾನದ ವಿರುದ್ಧ ಹೋರಾಡುತ್ತೀರಿ.

ಎರಡನೆಯ ಅಂಶದ ಬಗ್ಗೆ ನಾನಾ ಕಿರು ಪುಸ್ತಕಗಳು ತಾರುಣ್ಯ ಜೀವನದ ಅನುಕ್ರಮ ಅವಸ್ಥೆಗಳನ್ನು ತಿಳಿಸುತ್ತವೆ.

ಮೂರನೆಯದಾಗಿ ಗುಂಪಿನ ಪ್ರತಿಯೊಬ್ಬ ಹುಡುಗನನ್ನು ಪ್ರತ್ಯೇಕವಾಗಿ ಗುರುತಿಸಿ, ಅವನಲ್ಲಿ ಯಾವ ಶಕ್ತಿ ಇದೆಯೆಂಬುದನ್ನು ಕಂಡುಕೊಂಡು, ಒಳ್ಳೆಯ ಶಕ್ತಿಯನ್ನು ಗ್ರಹಿಸಿ, ಅವನಲ್ಲಿರುವ ಕೆಟ್ಟ ಗುಣಗಳನ್ನು ಹೊರ ಹಾಕುವಂತೆ ಆ ಒಳ್ಳೆಯ

ಶಕ್ತಿಯನ್ನು ವಿಕಾಸಗೊಳಿಸುವುದು ಸ್ಕೌಟ್ ಮಾಸ್ಟರನ ಕೆಲಸ. ಇದು ನಿಜಕ್ಕೂ ಅತ್ಯಂತ ಆಸಕ್ತಿಯ ವಿಷಯ. ಸಾಮಾನ್ಯವಾಗಿ ಅತ್ಯಂತ ಕೆಟ್ಟ ಗುಣಗಳ ವ್ಯಕ್ತಿಯಲ್ಲೂ ಶೇಕಡ 5 ರಷ್ಟಾದರೂ ಒಳ್ಳೆಯ ಗುಣಗಳಿರುತ್ತವೆ. ಇದನ್ನು ಗುರುತಿಸಿ ಈ ಶೇಕಡ 5 ಅಂಶವನ್ನು ಶೇಕಡ 80 ಅಥವಾ 90 ಅಂಶವಾಗುವಂತೆ ಬೆಳೆಸುವುದೇ ಇರುವುದು. ಇದು ಎಳೆಯ ಮಕ್ಕಳಿಗೆ ತಿಳಿವಳಿಕೆಯಾಗು ವುದಷ್ಟೇ ಅಲ್ಲ; ಅವರನ್ನು ತಿದ್ದಿದಂತಾಗುತ್ತದೆ.

ನಾಲ್ಕನೆಯದು ಸ್ಕೌಟ್ ತರಬೇತಿಯಲ್ಲಿ ದಳ (Patrol) ಅಥವಾ ತಂಡ (Gang) ವ್ಯವಸ್ಥೆಯು ವ್ಯೆಯಕ್ತಿಕ ತರಬೇತಿಯ ಸಾಮೂಹಿಕ ಅಭಿವ್ಯಕ್ತಿಯನ್ನು ತೋರಿಸುತ್ತದೆ. ಇದು ಹುಡುಗನಿಗೆ ಹೇಳಿ ಕೊಟ್ಟಿದ್ದೆಲ್ಲವನ್ನೂ ಕೃತಿಗಿಳಿಸುತ್ತದೆ.

ಸರಿಯಾಗಿ ಬಳಸಿಕೊಂಡುದೇ ಆದರೆ, ದಳ ವ್ಯವಸ್ಥೆಯಲ್ಲಿ ಅತ್ಯಂತ ಅಸಾಧಾರಣ ತರಬೇತಿ ಮೌಲ್ಯವಿದೆ. ತನ್ನ ದಳದ ಒಳಿತಿಗೆ ನಿರ್ದಿಷ್ಟವಾದ ತನ್ನ ವೈಯಕ್ತಿಕ ಹೊಣೆಗಾರಿಕೆ ಇದೆಯೆಂಬುದನ್ನು ಅರ್ಥಮಾಡಿಕೊಳ್ಳಲು ಪ್ರತಿಯೊಬ್ಬ ಹುಡುಗನಿಗೂ ದಳವು ಮಾರ್ಗದರ್ಶಕವಾಗುತ್ತದೆ. ಅದರ ಮೂಲಕ, ಸ್ಕೌಟ್ ಮಾಸ್ಟರನು ತನ್ನ ಸ್ಕೌಟುಗಳ ನೈತಿಕ ಮನೋಭಾವನೆಗೆ ತಕ್ಕಂತೆ ತನ್ನ ಬೋಧನೆಯಷ್ಟೆ ಅಲ್ಲ; ಆಲೋಚನೆಗಳನ್ನೂ ನೀಡಲು ಸಾಧ್ಯವಾಗುತ್ತದೆ. ಅದರ ಮೂಲಕ ತಮ್ಮ ತಂಡಗಳು ಮಾಡುವ ಕೆಲಸದಲ್ಲಿ ತಮಗೂ ಅಭಿಪ್ರಾಯ ಕೊಡುವ ಗಣನೀಯ ಅವಕಾಶವಿದೆ ಎಂಬುದನ್ನು ಸ್ಕೌಟುಗಳು ಕ್ರಮೇಣ ತಿಳಿದುಕೊಳ್ಳುತ್ತಾರೆ. ಗುಂಪು (Troop) ಅಥವಾ ತಂಡವನ್ನು ರೂಪಿಸುವುದು ದಳದ (Patrol) ಪದ್ಧತಿ. ಆ ದೃಷ್ಟಿಯಿಂದ ಇಡೀ ಸ್ಕೌಟಿಂಗ್ ಒಂದು ಸಹಕಾರಿ ಪ್ರಯತ್ನವಾಗಿದೆ.

**ಸ್ಕೌಟ್ ಮಾಸ್ಟರನ ಕರ್ತವ್ಯ**

ಸ್ಕೌಟ್ ಹುಡುಗನ ತರಬೇತಿಯ ಯಶಸ್ಸು ಬಹುಮಟ್ಟಿಗೆ ಸ್ವಯಂ ಸ್ಕೌಟ್ ಮಾಸ್ಟರನ ವೈಯಕ್ತಿಕ ಆದರ್ಶವನ್ನು ಅವಲಂಬಿಸಿದೆ. ಹುಡುಗನ ಹಿರಿಯಣ್ಣನಾಗುವಂತೆಯೇ ಮುಖಂಡನಾಗುವದು ಸುಲಭ. ಏಕೆಂದರೆ ಹುಡುಗನಲ್ಲಿ ನಾಯಕ ನಿಷ್ಠೆ ಅಪಾರವಾಗಿರುತ್ತದೆ. ಇದನ್ನು ನಾವು ಬೆಳೆದಂತೆಲ್ಲ ಮರೆತು ಬಿಡುವುದು ಸ್ವಾಭಾವಿಕ.

ತನ್ನ ಹುಡುಗರಿಗೆ ಮುಖಂಡನಾದ ಸ್ಕೌಟ್ ಮಾಸ್ಟರನು, ಅವರ ಅಭಿವೃದ್ಧಿಗೆ ಒಂದು ಪ್ರಬಲವಾದ ಸನ್ನೆಕೋಲನ್ನು ಪಡೆದಿರುತ್ತಾನೆ. ಆದರೆ, ಅದೇ ವೇಳೆಯಲ್ಲಿ, ತನ್ನ ಮೇಲೆಯೇ ಹೆಚ್ಚು ಹೊಣೆಗಾರಿಕೆ ತಂದುಕೊಳ್ಳುತ್ತಾನೆ. ಗುಣವಿರಲಿ, ದೋಷವಿರಲಿ, ಸ್ಕೌಟ್ ಮಾಸ್ಟರಲ್ಲಿ ಕಂಡು ಬರುವ ಅತ್ಯಂತ ಸಣ್ಣ ಸ್ವಭಾವವನ್ನೂ ಗಮನಿಸುವಷ್ಟು ಹುಡುಗರು ಚುರುಕಾಗಿರುತ್ತಾರೆ. ಅವನ ನಡತೆಗಳು ಅವರವಾಗುತ್ತವೆ. ಅವನು ತೋರುವ ವಿಶ್ವಾಸ. ಅವನ ವೇದನೆ, ಅವನ ಉಲ್ಲಾಸ, ಅಥವಾ ಅವನ ಅಸಹನೆಯ ನೋಟ, ಅವನ ದೃಢವಾದ ಸ್ವಯಂ ಶಿಸ್ತು ಅಥವಾ ಅವನಿಂದ ಆಗಾಗ ಸಂಭವಿಸುವ ನೈತಿಕ ತಪ್ಪುಗಳು-ಎಲ್ಲವೂ ಅವನ ಅನುಚರರಿಂದ ಅನುಸರಿಸಲ್ಪಡುತ್ತವೆ.

ಆದುದರಿಂದ, ಹುಡುಗರು ಸ್ಕೌಟ್ ಶಾಸನ ಮತ್ತು ಅದರಲ್ಲಿ ಅಡಗಿರುವ ಎಲ್ಲ ಸೂತ್ರಗಳನ್ನೂ ಪರಿಪಾಲಿಸುವಂತೆ ಮಾಡಲು, ಸ್ಕೌಟ್ ಮಾಸ್ಟರನು ಸ್ವತಃ ತನ್ನ ಜೀವನದಲ್ಲಿ ಸ್ಕೌಟ್ ಸೂತ್ರಗಳನ್ನು ಪರಿಪೂರ್ಣವಾಗಿ ಮತ್ತು ಕಟ್ಟುನಿಟ್ಟಾಗಿ ಪರಿಪಾಲಿಸಬೇಕು.

ಸ್ಕೌಟ್ ಮಾಸ್ಟರನ ಕೆಲಸ ಗಾಲ್ಫ್ (ಚೆಂಡಾಟ) ಆಟದಂತೆ ಅತವಾ ನೊಣದಿಂದ ಮೀನು ಹಿಡಿಯುವ ಕೆಲಸವಿದ್ದಂತೆ. ಸುಮ್ಮನೆ ಸ್ಥಿರವಾಗಿ ನಿಲ್ಲುವುದರಿಂದ ಪ್ರಯೋಜನವಿಲ್ಲ. ಪ್ರಗತಿ ಇರಲಿ ಅಥವಾ ವಿಶ್ರಾಂತಿಯಿರಲಿ ಒಂದಲ್ಲ ಒಂದು ಇರಬೇಕು. ಆದುದರಿಂದ ನಾವು ಮುಗುಳ್ನಗುತ್ತ ಮುಂದುವರಿಯೋಣ.

**ಚಳುವಳಿಗೆ ನಿಷ್ಠೆ**

ತನ್ನ ಹುಡುಗರಿಗೆ ಸಲ್ಲಬೇಕಾದ ಕರ್ತವ್ಯದ

ಜೊತೆಗೆ ಇಡೀ ಚಳುವಳಿಗೆ ಸಲ್ಲಿಸಬೇಕಾದ ಕರ್ತವ್ಯವೂ ಇದೆಯೆಂಬುದನ್ನು ಸ್ಕೌಟ್ ಮಾಸ್ಟರನು ಸದಾ ನೆನಪಿನಲ್ಲಿಟ್ಟುಕೊಳ್ಳಬೇಕು. ಹುಡುಗರನ್ನು ಒಳ್ಳೆಯ ನಾಗರಿಕರನ್ನಾಗಿ ಮಾಡುವ ನಮ್ಮ ಉದ್ದೇಶ ಒಂದು ದೃಷ್ಟಿಯಿಂದ ರಾಷ್ಟ್ರದ ಲಾಭಕ್ಕಾಗಿ. ಅಂದರೆ, ದೇಶದಲ್ಲಿ ಆಂತರಿಕವಾಗಿ ಐಕ್ಯತೆಯಿಂದಿರುವ ಮತ್ತು ನೆರೆಹೊರೆಯವರೊಡನೆ ಶಾಂತಿಯಿಂದಿರುವ ಸ್ನೇಹ ಹಾಗೂ ಕ್ರೀಡಾ ಮನೋಭಾವನೆಯು ಒಂದು ಪೌರುಷಯುಕ್ತ ವಿಶ್ವಾಸಾರ್ಹ ಜನಾಂಗವಿರ ಬೇಕೆಂಬುದೇ ನಮ್ಮ ಆಶಯ.

ಸ್ವಯಂ ತ್ಯಾಗ ಮತ್ತು ಶಿಸ್ತನ್ನು ಸ್ವತಃ ಪರಿಪಾಲಿಸುವ ಮೂಲಕ ಬೋಧಿಸುವ ಕರ್ತವ್ಯದ ಹೊಣೆ ಹೊತ್ತಿರುವ ಸ್ಕೌಟ್ ಮಾಸ್ಟರುಗಳು ಸಂಕುಚಿತವಾದ ವೈಯಕ್ತಿಕ ಭಾವನೆಗಳಿಂದ ದೂರವಿರಬೇಕು. ಮತ್ತು ತಮ್ಮ ಸ್ವಂತ ವೈಯಕ್ತಿಕ ಅಭಿಪ್ರಾಯಗಳನ್ನು ಸಮಷ್ಟಿಯ ಉನ್ನತ ನೀತಿಗೆ ಒಳಪಡಿಸುವಷ್ಟು ವಿಶಾಲ ಮನೋಭಾವವಿರಬೇಕು. ಹುಡುಗರಿಗೆ ಆಟ ಆಡಲು' ಕಲಿಸುವುದು ಅವರ ಕೆಲಸ. ಅಂದರೆ ತಾವೇ ಸ್ವಂತವಾಗಿ ಮಾಡುವ ಮೂಲಕ. ಗೋಡೆಯಲ್ಲಿನ ಇಟ್ಟಿಗೆಯಂತೆ, ಪ್ರತಿಯೊಬ್ಬ ಹುಡುಗನೂ ತನ್ನ ತನ್ನ ಸ್ಥಾನದಲ್ಲಿ ಕಲಿತುಕೊಳ್ಳುವಂತೆ ಮಾಡುವುದು. ಪ್ರತಿಯೊಬ್ಬರಿಗೂ, ಅವರಿಗಾಗಿ ನಿಗದಿ ಮಾಡಿದ ಕಾರ್ಯಕ್ಷೇತ್ರವಿರುತ್ತದೆ. ಅವನು ಆ ಕೆಲಸಕ್ಕೆ ಎಷ್ಟು ಚೆನ್ನಾಗಿ ಗಮನ ಕೊಡುತ್ತಾನೋ. ಅಷ್ಟು ಚೆನ್ನಾಗಿ ಅವನ ಸ್ಕೌಟುಗಳು ಅವನು ನೀಡುವ ತರಬೇತಿಯಲ್ಲಿ ಆಸಕ್ತಿ ವಹಿಸುತ್ತಾರೆ. ಅಂದರೆ, ಚಳುವಳಿಯ ಉನ್ನತ ಗುರಿಗಳತ್ತ ಅಥವಾ ಹತ್ತು ವರ್ಷಗಳ ನಂತರದ ಪರಿಣಾಮದತ್ತ ನಾವು ದೃಷ್ಟಿಯಿಟ್ಟುಕೊಳ್ಳಬೇಕು. ಅದರಿಂದ ಮಾತ್ರ ಇಂದಿನ ಕಾರ್ಯದ ಮೌಲ್ಯವನ್ನು ಯೋಗ್ಯಪ್ರಮಾಣದಲ್ಲಿ ಕಾಣಲು ಸಾಧ್ಯ.

ಎಲ್ಲಿ ಒಬ್ಬ ವ್ಯಕ್ತಿ ತನ್ನ ಆತ್ಮಪೂರ್ವಕವಾಗಿ ಅಗತ್ಯ ಮಾರ್ಗವನ್ನು ಅನುಸರಿಸಲಾಗುವುದಿಲ್ಲವೋ ಅಲ್ಲಿ, ಅವನಿಗಿರುವ ಒಂದು ಯೋಗ್ಯ ಮಾರ್ಗವೆಂದರೆ, ಅದನ್ನು ನೇರವಾಗಿ ತನ್ನ ಕಮಿಷನರ್ ಅಥವಾ ಕೇಂದ್ರ ಕಾರ್ಯಾಲಯಕ್ಕೆ ತಿಳಿಸುವುದು ಮತ್ತು ಅವನ ಅಭಿಪ್ರಾಯವನ್ನು ಆ ಮೇಲ್ಪಟ್ಟವರು ಅರ್ಥವಮಾಡಿಕೊಳ್ಳದಿದ್ದರೆ ಆ ಕೆಲಸವನ್ನು ಕೈಬಿಡುವುದು. ಮೊದಲು ತೆರೆದ ಹೃದಯದಿಂದ ಆ ಕೆಲಸಕ್ಕೆ ಹೋಗಿ, ನಂತರ. ಅದರ ವಿವರಗಳು ತನಗೆ ಸರಿಹೊಂದಲಿಲ್ಲವೆಂಬ ಕಾರಣದಿಂದ ಅದು ಕಾರ್ಯನಿರ್ವಾಹಕರ ತಪ್ಪೆಂದು ಅವನು ದೂರಿದರೆ ಅದು ಸೂಕ್ತವಲ್ಲ.

ಅದೃಷ್ಟವಶಾತ್, ವಿಕೇಂದ್ರೀಕರಣ ಹಾಗೂ ಸ್ಥಳೀಯ ಅಧಿಕಾರಿಗಳಿಗೆ ಸ್ವಾತಂತ್ರ್ಯ ಕೊಡುವ ಮೂಲಕ, ನಮ್ಮ ಚಳುವಳಿಯಲ್ಲಿ ಇತರ ಅನೇಕ ಸಂಸ್ಥೆಗಳಲ್ಲಿ ಕಿರುಕುಳ ಮತ್ತು ದೂರುಗಳಿಗೆ ಕಾರಣವಾಗಿರುವ ವಿಳಂಬವನ್ನು ಮಾತ್ರ ನಾವು ಬಹಳ ಮಟ್ಟಿಗೆ ತಪ್ಪಿಸುತ್ತೇವೆ.

ನಮ್ಮಲ್ಲಿ, ಇಡೀ ಚಳುವಳಿಯ ಬಗ್ಗೆ ತಮ್ಮ ದೃಷ್ಟಿ ಮತ್ತು ನಿಷ್ಠೆ ಎರಡರಲ್ಲೂ ವಿಶಾಲ ಮನೋಭಾವನೆಯುನ್ನು ಹೊಂದಿರುವ ಸ್ಕೌಟ್ ಮಾಸ್ಟರುಗಳ ಒಂದು ಸಮೂಹವೇ ಇರುವುದು ನಮ್ಮ ಅದೃಷ್ಟ.

**ಸ್ಕೌಟ್ ಮಾಸ್ಟರನ ಪ್ರತಿಫಲ**

ಒಮ್ಮೆ ಒಬ್ಬ ವ್ಯಕ್ತಿ, ಪ್ರಪಂಚದಲ್ಲಿ ತಾನೇ ಅತ್ಯಂತ ಸುಖಿ ಎಂದು ನನಗೆ ಹೇಳುವ ಧೈರ್ಯ ಮಾಡಿದ! ಆಗ ನಾನು. ಅವನಿಗಿಂತ ಸುಖಿಯಾಗಿರುವ ಒಬ್ಬ ವ್ಯಕ್ತಿಯ ಅಂದರೆ ನನ್ನ' ವಿಷಯ ಹೇಳಬೇಕಾಯಿತು.

ಈ ಸುಖವನ್ನು ಪಡೆಯುವಲ್ಲಿ ನಮ್ಮಿಬ್ಬರಲ್ಲಿ ಯಾರೂ ಎಂದೂ ಕಷ್ಟಗಳನ್ನು ಎದುರಿಸಲಿಲ್ಲವೆಂದು ನೀವು ಊಹಿಸಬೇಕಾದ ಅಗತ್ಯವೇ ಇಲ್ಲ. ನಮ್ಮಿಬ್ಬರ ಅನುಭವ ಅದಕ್ಕೆ ತದ್ವಿರುದ್ಧ.

ನಾವು ಯಶಸ್ವಿಯಾಗಿ ಕಷ್ಟ ನಷ್ಟಗಳನ್ನು ಎದುರಿಸಿದಾಗ ಮತ್ತು ಕಿರುಕುಳಗಳನ್ನು ಸಹಿಸಿದಾಗ

ಉಂಟಾಗುವ ತೃಪ್ತಿಯೇ, ಅವುಗಳನ್ನು ದಾಟಿದ ಆನಂದಕ್ಕೆ ಪೂರ್ಣತೆ ತಂದುಕೊಡುತ್ತದೆ.

ನಿಮ್ಮ ಜೀವನವನ್ನು ಹೂವಿನ ಹಾಸಿಗೆಯಾಗಬೇಕೆಂದು ನಿರೀಕ್ಷಿಸಬೇಡಿ. ಅದು ಹಾಗಾದರೆ ಅದರಲ್ಲಿ ಸ್ವಾರಸ್ಯವೇ ಇರುವುದಿಲ್ಲ.

ಆದ್ದರಿಂದ ಸ್ಕೌಟ್‌ಗಳೊಡನೆ ವ್ಯವಹರಿಸುವಾಗ ನೀವು ಆಶಾಭಂಗ ಮತ್ತು ಹಿಂಜರಿತಗಳನ್ನು ಎದುರಿಸಬೇಕಾಗುತ್ತದೆ. ತಾಳ್ಮೆಯಿಂದಿರಿ: ಹೆಚ್ಚು ಜನ, ತಮ್ಮ ಕೆಲಸ ಅಥವಾ ಜೀವವನ್ನು ಕುಡಿತ ಅಥವಾ ದುರಭ್ಯಾಸಗಳಿಗಿಂತ ಹೆಚ್ಚಾಗಿ ತಾಳ್ಮೆಯ ಕೊರತೆಯಿಂದ ಹಾಳುಮಾಡಿ ಕೊಳ್ಳುತ್ತಾರೆ. ನೀವು ಕೆಲಮಟ್ಟಿಗೆ ಕಿರುಕುಳದ ಟೀಕೆಗಳು ಮತ್ತು ವಿಳಂಬದ ಬಂಧನಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳಬೇಕಾಗುತ್ತದೆ. ಆದರೆ, ನಿಮ್ಮ ತಾಳ್ಮೆಗೆ ಪ್ರತಿಫಲ ಬಂದೇ ಬರುತ್ತದೆ.

ಸ್ವಂತ ತ್ಯಾಗದಿಂದ ಕರ್ತವ್ಯ ನಿರ್ವಹಿಸಲು ಮಾಡುವ ಪ್ರಯತ್ನ ದಿಂದ ಮತ್ತು ಹುಡುಗರಲ್ಲಿ ಅವರ ಜೀವನಕ್ಕೆ ವಿಶಿಷ್ಟವಾದ ಸ್ಥಾನ ಮಾನವನ್ನು ಕೊಡುವಂತಹ ಸದ್ಗುಣಗಳನ್ನು ಬೆಳಸುವುದರಿಂದ ಬರುವ ತೃಪ್ತಿ ಅನಿರ್ವಚನೀಯವಾದುದು. ಅದು ಬರವಣಿಗೆಯಲ್ಲಿ ಬರೆದು ತೋರಿಸಲಾಗದಂತಹ ವಿಶಿಷ್ಟ ಪ್ರತಿಫಲವನ್ನು ತಂದುಕೊಡುತ್ತದೆ!

ಅವಕಾಶ ಕೊಟ್ಟರೆ, ನಮ್ಮ ಯುವ ಜನಾಂಗವನ್ನು ಅನತಿ ಕಾಲದಲ್ಲೇ ಕೆಡಿಸುವಂತಹ ಕೇಡುಗಳು ಮತ್ತೆ ತಲೆದೋರದಂತೆ ತಡೆಗಟ್ಟಲು ಮಾಡಿದ ಪ್ರಯತ್ನವು ವ್ಯಕ್ತಿಗೆ, ತನ್ನ ಸ್ಥಾನ ಎಷ್ಟೇ ದೀನವಾಗಿರಲಿ, ತನ್ನ ಸೇವೆ ಎಷ್ಟೇ ಅಲ್ಪ ಪ್ರಮಾಣದ್ದಾಗಿರಲಿ, ತನ್ನಿಂದ ರಾಷ್ಟ್ರಕ್ಕಾಗಿ ಸ್ವಲ್ಪವಾದರೂ ಸೇವೆ ಸಂದಿದೆಯೆಂಬ ಪೂರ್ಣ ತೃಪ್ತಿಯನ್ನು ನೀಡುತ್ತದೆ.

ಸ್ಕೌಟರ್' ಎಂಬ ಶಬ್ದವು ವಿವರಿಸುವ ಸ್ಕೌಟ್ ಮಾಸ್ಟರ್, ಕಮಿಷನರ್, ಕಮಿಟಿ ಸದಸ್ಯ, ಶಿಕ್ಷಕ, ವ್ಯವಸ್ಥಾಪಕ, ಕಾರ್ಯದರ್ಶಿ ಎಲ್ಲರೂ ಈ ಭಾವನೆಯಿಂದ ಬಾಯ್ ಸ್ಕೌಟ್' ಚಳುವಳಿಯಲ್ಲಿ ಕೆಲಸ ಮಾಡಬೇಕು.

ಸ್ಕೌಟ್ ಚಳುವಳಿಯ ಸಂಘಟನೆ ಮತ್ತು ಪ್ರಸಾರದ ಕೀರ್ತಿ ನಮ್ಮ ಸ್ವಯಂ ಸೇವಕರ ದಳಕ್ಕೆ ಸಲ್ಲಬೇಕು. ಅನೇಕ ರಾಷ್ಟ್ರಗಳ ಮಣ್ಣಿನಡಿಯಲ್ಲಿ. ಅದು ಮೌನವಾಗಿದ್ದರೂ, ಉಜ್ವಲವಾಗಿರುವ ರಾಷ್ಟ್ರ ಪ್ರೇಮದ ಗಮನಾರ್ಹ ಸಾಕ್ಷಿ ನಮಗಿದೆ. ಈ ಜನರು ಸ್ಕೌಟ್ ಹುಡುಗರ ತರಬೇತಿ ವ್ಯವಸ್ಥೆಯ ಕಾರ್ಯಕ್ಕೆ ತಮ್ಮ ಕಾಲ, ಶಕ್ತಿ ಮತ್ತು ಅನೇಕ ಸಂದರ್ಭಗಳಲ್ಲಿ ತಮ್ಮ ಹಣವನ್ನೂ ಸಹ ನೀಡುತ್ತಾರೆ. ತಮ್ಮ ಕೆಲಸಕ್ಕೆ ಯಾವುದೇ ಪ್ರತಿಫಲ ಅಥವಾ ಪ್ರಶಂಸೆಯ ದೃಷ್ಟಿಯಿಲ್ಲದೆ ದುಡಿಯುತ್ತಾರೆ. ಅವರು ತಮ್ಮ ದೇಶ ಮತ್ತು ತಮ್ಮ ಜನಾಂಗದ ಪ್ರೇಮಕ್ಕಾಗಿ ಆ ಸೇವೆ ಸಲ್ಲಿಸುತ್ತಾರೆ.

(ಬಾಯ್ ಸ್ಕೌಟ್ ಚಳುವಳಿಯ ಜನಕ ಲಾಡ್ ಬೇಡನ್ ಪೊವೆಲ್ ಆಫ್ ಗಿಲ್‌ವೆಲ್ ಅವರ "Aids to Scout-Mastership" ಎಂಬ ಕೃತಿಯ 'Scout-master' ಎಂಬ ಅಧ್ಯಾಯದ ಭಾವಾನುವಾದ)

**ಸ್ಕೌಟು "ಪ್ರಪಂಚದಲ್ಲಿ ಎಲ್ಲರಿಗೂ ಸ್ನೇಹಿತನು" ಮತ್ತು "ಇತರ ಎಲ್ಲಾ ಸ್ಕೌಟುಗಳಿಗೂ ಸೋದರನು"**

**ಸ್ನೇಹಿತನನ್ನು ಪಡೆಯಬೇಕಾದರೆ ನೀನು ಸ್ನೇಹಿತನಾಗು**

**ಅಭಿವೃದ್ಧಿ ಪಥದಲ್ಲಿ ಮುಂದುವರೆಯಲು, ಮರಿಯು ಸ್ಕೌಟನ್ನೂ, ಸ್ಕೌಟು ಹಿರಿಯ ಸ್ಕೌಟ್ ಅಥವಾ ಆದಿ ಪರಿಶೋಧಕನನ್ನೂ ತಮ್ಮ ಆದರ್ಶಗಳಿಗಾಗಿ, ತನ್ಮಯ ಭಾವದಿಂದ ನೋಡುತ್ತಾರೆ.**

## ಸ್ಕೌಟು ಎಂದರೆ ಸ್ಕೌಟು

ಸ್ಕೌಟು ಎಂದರೆ ಸ್ಕೌಟು ಕಾಣಪ್ಪ । ಓನಮ್ಮಪ್ಪಾ
ಸ್ಕೌಟು ಎಂದರೆ ಸ್ಕೌಟು ಕಾಣಪ್ಪಾ ಆ ಆ ಆ.....
ಲಾರ್ಡ್ ಪೋವೆಲ್‌ರವರು ಸ್ಕೌಟ್ನ ಮಹಾಪುರುಷಾರಪ್ಪಾ
ಇವರ ಮಾರ್ಗದರ್ಶನದಲ್ಲಿ ಸ್ಕೌಟುನೆಲೆಯೂರಿತಪ್ಪಾ
ಇವರಮಾರ್ಗದರ್ಶನದಲ್ಲಿ ಇವರ ಮಾರ್ಗದರ್ಶನದಲ್ಲಿ
ವಿಶ್ವವ್ಯಾಪಿಹರಡೀತಪ್ಪಾ ॥ ಸ್ಕೌಟು ॥
ಮೇಲುಕೀಳು ಇದಕಿಲ್ಲಪ್ಪಾ
ಜಾತಿ ಬೇಧ ಮೊದಲಿಲ್ಲಪ್ಪಾ
ಸತ್ಯಶಾಂತಿ ನ್ಯಾಯ ನೀತಿ, ಇದರ ಮೂಲ ಮಂತ್ರಾವಪ್ಪಾ
ಸತ್ಯಶಾಂತಿ ನ್ಯಾಯ ನೀತಿ ॥ ಇದರ ಮೂಲ ಮಂತ್ರಾವಪ್ಪಾ
॥ ಸತ್ಯ ಶಾಂತಿ ನ್ಯಾಯ ನೀತಿ ॥
ನಾವು ಸ್ಕೌಟು ಸೇರಿದೆವಪ್ಪಾ
ಸೇವಭಾವ ಬೆಳೆಸುವೆವಪ್ಪಾ
ಸರಳ ಜೀವನ ಮಾಡುವೆವಪ್ಪಾ। ಉತ್ತಮಯೋಚನೆ ಮಾಡುವೆವಪ್ಪಾ
ಉತ್ತಮಯೋಚನೆಮಾಡುವೆವಪ್ಪಾ ॥ ಉತ್ತಮಯೋಚನೆ ಮಾಡುವೆವಪ್ಪ
ವಿಶ್ವಮಾನವರಾಗುವವಪ್ಪಾ ॥ ಸ್ಕೌಟು ॥
ಸ್ಕೌಟಿನ ಈ ಜಗಜ್ಯೋತಿ
ಜಗಕೆಲ್ಲಾ ಇದರ ಕೀರ್ತಿ ಹಬ್ಬಲಪ್ಪಾ
ಶಿವಪ್ಪನಾಯಕ, ಟ್ರೂಪು ತಂಡಾ
ಶರಣ ಶರಣು ಮಾಡುವೆನೆಂದಾ
ಸ್ಕೌಟು ಎಂದರೆ ಸ್ಕೌಟು ಕಾಣಪ್ಪಾ

**ರೇವಣ್ಣಪ್ಪ. ಎಂ.ಆರ್**
ಸ್ಕೌಟ್ ಶಿಕ್ಷಕ
ಸ ॥ ಹಿ ॥ ಪ್ರಾ ॥ ಶಾಲೆ ಅರಳಸುರುಳಿ, ಶಿವಮೊಗ್ಗ ಜಿಲ್ಲೆ

## ಒದುಗರ ಅನಿಸಿಕೆ

ಮಾನ್ಯರೆ,

ಕರ್ನಾಟಕ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಮ್ಯಾಗಝಿನ್ ಜೂನ್ ತಿಂಗಳದ್ದು ನೋಡಿ ತುಂಬಾ ಸಂತೋಷವಾಯಿತು. ಈ ಮ್ಯಾಗಝೀನನಲ್ಲಿ ಅದರಲ್ಲೂ ಮುಖ್ಯ ಪುಟದಲ್ಲಿ ನಮ್ಮ ರಾಜ್ಯದಲ್ಲಿ ನಡೆಯುವ ಕರ್ನಾಟಕ ರಾಜ್ಯದ ನಕಾಶೆಯಲ್ಲಿ ಎಲ್ಲ ಚಟುವಟಿಕೆಗಳ ಛಾಯಾ ಚಿತ್ರಗಳೊಂದಿಗೆ ಸುಂದರವಾದ ಪತ್ರಿಕೆ ಹೊರತಂದದ್ದು ನಿಜವಾಗಿಯೂ ಎಲ್ಲರಿಗೆ ಹೆಮ್ಮೆ ತರುವ ವಿಷಯವಾಗಿದೆ. ಮಕ್ಕಳ ಚಟುವಟಿಕೆಗಳು ರಾಜ್ಯ ಸಂಸ್ಥೆಯ ಚಟುವಟಿಕೆಗಳು ಪ್ರಶಂಸನೀಯವಾಗಿವೆ. ತರಬೇತು ನಾಯಕರಿಗೆ ನೀಡಿದ ಮಾಹಿತಿಯು ಅತ್ಯುತ್ತಮವಾಗಿದೆ. ನಮ್ಮ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮ್ಯಾಗಝಿನ್ ಈ ರೀತಿ ಆಕರ್ಷಣೀಯವಾಗಿ ಹೊರತರಲು ಪ್ರಯತ್ನಿಸಿದ ಸಂಪಾದಕರಿಗೂ ಮತ್ತು ಸಂಪಾದಕ ಮಂಡಳಿಗೂ ಅಭಿನಂದನೆಗಳು. ಈ ರೀತಿ ಮುಂದಿನ ದಿನಗಳಲ್ಲಿ ಈ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮ್ಯಾಗಝೀನ್ ಉಜ್ವಲ ಭವಿಷ್ಯ ಕಾಣುವಂತಾಗಲಿ ಎಂದು ಹಾರೈಸುತ್ತಿದ್ದೇನೆ.

ಬಿ.ಡಿ. ಫರ್ನಾಂಡಿಸ್
ಎ.ಎಲ್.ಟಿ. (ಸ್ಕೌ) ಡಿ.ಟಿ.ಸಿ. ಉತ್ತರ ಕನ್ನಡ



Active participation of Cubs, Scouts and Guides in various activities

Regd as News Paper (Magazine) No :

**KARNATAKA SCOUT & GUIDE**



*If not delivered please return to :*
Editor, Karnataka Scout & Guide
State, Headquarters, Prof. P. Sivashankar Circle
Kondajji Basappa Road, Fort
Bangalore - 560 002

BOOK-POST

*Published for*: The Bharat Scouts & Guides, Karnataka, State Headquarters, Fort, Bangalore - 560 002 by the State Secretary and *Printed at*: Sathyasri Printers (Pvt) Ltd., 5th Main Chamarajpet, Bangalore-18